ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 18 ನೇ ಮಾರ್ಚ್, 2020

ವಸತಿ ಯೋಜನೆಗಳಲ್ಲಿನ ಪ್ರಗತಿ ಮತ್ತು ಸಹಾಯಧನ ವಿಳಂಬವಾಗುತ್ತಿರುವ ಬಗ್ಗೆ

ಶ್ರೀ ಟಿ.ಎ. ಶರವಣ (ವಿಧಾನಸಭೆಯಿಂದ ಚುನಾಯಿತರಾದವರು) -

176 (1376) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ರಾಜ್ಯದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿನ ಬಡವರಿಗಾಗಿ ಸೂರು ಕಲ್ಪಿಸಲು ಯಾವ ಯಾವ ವಸತಿ ಯೋಜನೆಗಳು ಪ್ರಸ್ತುತ ಜಾರಿಯಲ್ಲಿವೆ ;

(ಆ) ಕಳೆದ 05 ವರ್ಷಗಳಲ್ಲಿ ಸದರಿ ಯೋಜನೆಗಳಡಿಯಲ್ಲಿ ಹಂಚಿಕೆ ಮಾಡಲಾದ ಗುರಿಯ ಪ್ರಮಾಣ ಎಷ್ಟು ; ಮತ್ತು ಅದಕ್ಕೆ ಎದುರಾಗಿ ಸಾಧಿಸಲಾದ ಪ್ರಗತಿಯ ಪ್ರಮಾಣ ಎಷ್ಟು ;

(ಇ) ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿನ ಫಲಾನುಭವಿಗಳಿಗೆ ನೀಡಲಾಗುತ್ತಿರುವ ಸಹಾಯಧನದ ಮೊತ್ತ ಎಷ್ಟು ; ಹಾಗೂ ಈ ಸಹಾಯಧನವನ್ನು ಯಾವ ಮಾನದಂಡದ ಆಧಾರದ ಮೇಲೆ ನೀಡಲಾಗುತ್ತಿದೆ;

(ಈ) ಮನೆ ಕಾಮಗಾರಿ ಆರಂಭವಾದ ಎಷ್ಟು ದಿನಗಳೊಳಗಾಗಿ ಪೂರ್ಣಗೊಳ್ಳಬೇಕು ಅದರನುಸಾರವಾಗಿ ಸಹಾಯಧನವನ್ನು ಫಲಾನುಭವಿಗಳಿಗೆ ತಲುಪಿಸಲಾಗುತ್ತಿದೆಯೇ ;

(ಉ) ನಕಲಿ ಫಲಾನುಭವಿಗಳನ್ನು ಪತ್ತೆ ಹಚ್ಚಲು ಪರಿಶೀಲನೆ ನಡೆಸಲಾಗುತ್ತಿರುವ ನೆಪದಲ್ಲಿ ಅರ್ಹ ಫಲಾನುಭವಿಗಳು ಸಹಾಯಧನ ಪಡೆಯುವಲ್ಲಿ ತೊಂದರೆ ಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದರೆ, ಅದರ ನಿವಾರಣೆಗೆ ಅನುಸರಿಸಿದ ಕ್ರಮಗಳೇನು ?